



# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 30

| ಸಂಪುಟ: ೦೪ ಸಂಚಿಕೆ: ೪ | ಜುಲೈ ೨೦೧೭ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 04 Issue 4 | July 2017 | Pages - 8 | A. Sub. - Rs. 20/- | Editor : Sri. B.R. Ravindranath |




**ಚಂದಾ ವಿವರಗಳು**

ವಾರ್ಷಿಕ ಚಂದಾ
ರೂ. ೨೦/–
ಐದು ವರ್ಷಗಳ ಚಂದಾ
ರೂ. ೧೦೦/–


ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org


## "ಶ್ರೀಮತಿ ಎಂ.ಕೆ. ಇಂದಿರಾ– ನೂರರ ನಮನ, ಕೃತಿಗಳ ಮನನ".

## ವೈಯಾಕರಣಿಗರಣಿ ಕೃಷ್ಣಾಚಾರ್ಯ ದತ್ತಿ ಕಾರ್ಯಕ್ರಮ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು, ದಿವಂಗತ ಶ್ರೀಮತಿ ಎಂ.ಕೆ. ಇಂದಿರಾ ಅವರ ಜನ್ಮಶತಮಾನೋತ್ಸವದ ಪ್ರಯುಕ್ತ ಅವರ ನೆನಪಿನಲ್ಲ ದಿನಾಂಕ 28 ಮೇ 2017ರಂದು "ಶ್ರೀಮತಿ ಎಂ.ಕೆ. ಇಂದಿರಾ– ನೂರರ ನಮನ, ಕೃತಿಗಳ ಮನನ" ವಿಚಾರ ಸಂಕಿರಣವನ್ನು ಏರ್ಪಡಿಸಿ ಆ ಗಣ್ಯ ಲೇಖಕಿಯನ್ನು ನೆನಪಿಸಿಕೊಳ್ಳುವ ವಿಶಿಷ್ಟ ಮತ್ತು ಉತ್ತಮ ಕಾರ್ಯಕ್ರಮವೊಂದನ್ನು ಆಯೋಜಿಸಿತ್ತು. ಶ್ರೀಮತಿ ಉಷಾ ಪಿ.ರೈ, ಹೆಸರಾಂತ ಲೇಖಕಿ ಮತ್ತು ಇಂದಿರಾ ಅವರೊಂದಿಗೆ ನಿಕಟ ಸಂಪರ್ಕವನ್ನಿರಿಸಿಕೊಂಡವರು ಒಬ್ಬ ಉಪನ್ಯಾಸಕರಾದರೆ, ಇನ್ನಿಬ್ಬರು ಉಪನ್ಯಾಸಕರು ಶ್ರೀಮತಿ ಸಂಯುಕ್ತಾ ಪುಲಿಗಲ್ ಮತ್ತು ಶ್ರೀ ಸಹ್ಯಾದ್ರಿ ನಾಗರಾಜ್, ಯುವ ಬರಹಗಾರರು, ಇಂದಿರಾ ಅವರ ಪರಿಚಯ ಪರೋಕ್ಷವಾಗಿ ಅವರ ಪುಸ್ತಕಗಳ ಮೂಲಕ ಹಲವು ದಶಕಗಳಿಂದ ಇದ್ದು, ಅವರ ಬರಹಗಳಿಂದ ಅತ್ಯಂತ ಪ್ರಭಾವಕ್ಕೊಳಗಾದವರು. ಇಂದಿರಾ ಅವರ ಅಭಿಮಾನಿಗಳಿಂದ ಸಭಾಂಗಣವು ತುಂಬಿತ್ತು.

ಶ್ರೀಮತಿ ಉಷಾ.ಪಿ.ರೈ ಅವರು, ಇಂದಿರಾರೊಂದಿಗಿನ ಅವರ ಮೊದಲ ಭೇಟಿ, ಅವರ ಸರಳತೆ, ನಿರಾಡಂಬರ, ಬೆಳೆಯುವ ಯುವ ಲೇಖಕರಿಗೆ ಪ್ರೋತ್ಸಾಹ, ಅವರ ಸ್ನೇಹ ಜೀವತ್ವ, ಮತ್ತೊಬ್ಬರ ಕಷ್ಟಕ್ಕೆ ಮಿಡಿಯುವಿಕೆ ಮುಂತಾದ ಗುಣಗಳನ್ನು ಸಂದರ್ಭಸಹಿತ ನೆನಪಿಸಿಕೊಂಡರು. ಇಂದಿರಾ ಅವರ ಬರೆಯುವ ಶೈಲಿ, ಮಲೆನಾಡ ಪರಿಸರ, ಅಲ್ಲಿನ ಭಾಷೆ ಮುಂತಾದ ಅಂಶಗಳನ್ನು ಅವರ ಕಥೆ, ಕಾದಂಬರಿಗಳನ್ನು ಉಲ್ಲೇಖಿಸಿ ಮಾತನಾಡಿದರು.

ಶ್ರೀಮತಿ ಸಂಯುಕ್ತಾ ಪುಲಿಗಲ್ ತಮ್ಮ Power Point Presentation ಮೂಲಕ, ಇಂದಿರಾ ಅವರ ಕಥೆ, ಕಾದಂಬರಿಗಳಲ್ಲಿ ಕಥೆಕಟ್ಟುವಿಕೆ, ತಂತ್ರ, ಶೈಲಿ, ನೈಜ ಘಟನೆಗಳ ಚಿತ್ರಣ, ವಿವಿಧ ಪಾತ್ರಗಳ ಚಿತ್ರಣ, ಭಾಷೆಯ ಬಳಕೆ– ದೇಸೀ ಪದಗಳ ಬಳಕೆ, ಸಾಂದ್ರವಾದ ಭಾಷೆ, ಕಥಾ ಆವರಣ, ಪೂರಕ ಪರಿಸರ, ಹಾಸ್ಯ ಪ್ರಜ್ಞೆ– ಚಿತ್ರಣ, ವಿಷಯ ವೈವಿಧ್ಯತೆ, ವೈಚಾರಿಕ ಪ್ರಜ್ಞೆ ಮುಂತಾದವನ್ನು ಪಾತ್ರಗಳ ಮೂಲಕ ಗುರುತಿಸಿ, ಸಭಿಕರ ಮೆಚ್ಚುಗೆಗೆ ಪಾತ್ರವಾದರು. "Writer is Word trapped inside a Person" ಎಂಬ ವಿಕ್ಟರ್ ಹ್ಯೂಗೋನ ನಾಣ್ನುಡಿಯು ಇಂದಿರಾ ಅವರಿಗೆ ಅಕ್ಷರಶಃ ಅನ್ವಯಿಸುತ್ತದೆ ಎಂಬ ಅಭಿಪ್ರಾಯ ವ್ಯಕ್ತಪಡಿಸಿದರು. ಅವರ ಯಾವ ಕೃತಿಗಳಲ್ಲೂ "ಸ್ತ್ರೀವಾದದ" ಛಾಯೆ (Feminist) ಕಂಡು ಬರುತ್ತಿರಲಿಲ್ಲ ವೆಂಬುದನ್ನೂ ಗಮನಿಸಬಹುದು.

ಸಹ್ಯಾದ್ರಿ ನಾಗರಾಜ್ ಅವರು ಪ್ರಾರಂಭದಲ್ಲಿ "ಅಹಲ್ಯ" ಎಂಬ ಬೆಂಗಾಲಿ ಭಾಷೆಯ 20ನಿಮಿಷದ ಒಂದು ಕಿರುಚಿತ್ರವನ್ನು ಸಭಿಕರಿಗೆ ಪರಿಚಯಿಸಿ, ನಂತರ ಇಂದಿರಾ ಅವರು ತಮ್ಮ ಇಪ್ಪತ್ತು ಕೃತಿಗಳಲ್ಲಿ ಸೃಷ್ಟಿಸಿರುವ ವೈವಿಧ್ಯಮಯ ಪಾತ್ರಗಳ ವಿಶ್ಲೇಷಣೆ ಮಾಡಿ, ಅವುಗಳು ಆಗಿನ ಕಾಲಮಾನದಲ್ಲಿ / ಕಾಲಘಟ್ಟದಲ್ಲಿ ಕೇವಲ ಪ್ರಾತಿನಿಧಿನ ಪಾತ್ರಗಳಾಗುತ್ತದೇ ಹೊರತು, ಪ್ರಸ್ತುತ ಕಾಲಘಟ್ಟದಲ್ಲಿ ಸಾಧ್ಯವಿಲ್ಲವೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.



## ಸಂಪಾದಕೀಯ

ಕನ್ನಡ ಸಾಹಿತ್ಯ ಪರಿಷತ್ತು ವತಿಯಿಂದ ಕನ್ನಡಿಗರಿಗೆ ಉದ್ಯೋಗಗಳನ್ನು ದೊರಕಿಸಿಕೊಡುವ ಕೆಲಸ ಪ್ರಾರಂಭಗೊಂಡಿರುವುದು ಸ್ವಾಗತಾರ್ಹ. ಕನ್ನಡ ಸಾಹಿತ್ಯ ಪರಿಷತ್ ಹೊಂದಿರುವ ಸರಕಾರದ ಬೆಂಬಲ, ಧನಬಲ, ಜನಬಲ ಹಾಗೂ ಜನಪ್ರಿಯತೆಗಳಿಂದ ಇಂತಹ ಕೆಲಸಗಳನ್ನು ಬಹಳ ಯಶಸ್ವಿಯಾಗಿ ಮುಂದುವರೆಸಬಹುದಾಗಿರುತ್ತದೆ. ಕನ್ನಡ ಸಾಹಿತ್ಯ ಪರಿಷತ್‌ಗೆ ನಮ್ಮೆಲ್ಲರ ಬೆಂಬಲವಿದೆ.

ಕನ್ನಡ ಪರ ಕೆಲಸಗಳನ್ನು ಮಾಡುವ ಹಲವಾರು ಸಂಸ್ಥೆಗಳು ನಾಡಿನಾದ್ಯಂತ ಸಕ್ರಿಯರಾಗಿದ್ದು ಬಹಳಷ್ಟು ಉತ್ತಮ ಕೆಲಸಗಳನ್ನು ನಡೆಸುತ್ತಿವೆ. ಇಂತಹ ಸಂಸ್ಥೆಗಳಲ್ಲಿ ದುಡಿಯುತ್ತಿರುವ ಕನ್ನಡ ಪ್ರೇಮಿ ಸಿಬ್ಬಂದಿ ವರ್ಗದವರು ಬಹುತೇಕವಾಗಿ ಕಡಿಮೆ ಮಟ್ಟದ ವೇತನ ಪಡೆಯುತ್ತಿದ್ದರೂ ಸಂಸ್ಥೆಗಳ ಕೆಲಸಗಳನ್ನು ಅಚ್ಚುಕಟ್ಟಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಇಂತಹ ಸಿಬ್ಬಂದಿ ವರ್ಗದವರಿಗೆ ಪ್ರೋತ್ಸಾಹ ನೀಡಬಲ್ಲ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕಾಗಿದೆ. ಪ್ರತಿ ಸಂಸ್ಥೆಯಲ್ಲಿ ಕೆಲವೇ ಸಂಖ್ಯೆಯಲ್ಲಿರುವ ಸಿಬ್ಬಂದಿಗಳಿಗೆ ತರಬೇತಿ ಕಾರ್ಯಕ್ರಮಗಳು, ಪಿಂಚಣಿ ವ್ಯವಸ್ಥೆ, ಜೀವ ವಿಮೆ, ಆರೋಗ್ಯ ವಿಮೆ, ಸಾಲ ಸೌಲಭ್ಯಗಳು ಇತ್ಯಾದಿ ಸವಲತ್ತುಗಳನ್ನು ಒದಗಿಸಿಕೊಡುವುದು ಎಲ್ಲ ಕನ್ನಡಿಗರ ಜವಾಬ್ದಾರಿಯಾಗಿರುತ್ತದೆ. ಇದನ್ನು ಸಾಧಿಸುವಲ್ಲಿ ಹಲವಾರು ಸವಾಲುಗಳನ್ನು ಎದುರಿಸಬೇಕಾಗುತ್ತದೆ. ಈ ನಿಟ್ಟಿನಲ್ಲಿ ಎಲ್ಲ ಕನ್ನಡಪರ ಸಂಘ ಸಂಸ್ಥೆಗಳು ಜೊತೆಗೂಡಿ ಸೂಕ್ತ ಯೋಜನೆಗಳನ್ನು ರೂಪಿಸುವ ಅಗತ್ಯ ಕಂಡುಬರುತ್ತಿದೆ. ಬಹುರಾಷ್ಟ್ರೀಯ ಕಂಪೆನಿಗಳು, ವಾಣಿಜ್ಯ ಸಂಸ್ಥೆಗಳು, ಸರಕಾರಿ ಸಂಸ್ಥೆಗಳು ಹಾಗೂ ಇತರ ಅಸಂಖ್ಯಾತ ಉದ್ಯೋಗದಾತ ಸಂಸ್ಥೆಗಳು ಉತ್ತಮ ಮಟ್ಟದ ವೇತನ ಹಾಗೂ ಸವಲತ್ತುಗಳನ್ನು ನೀಡುತ್ತಿರುವ ಈ ಕಾಲಘಟ್ಟದಲ್ಲಿ ಕನ್ನಡಪರ ಕೆಲಸಗಳನ್ನು ಮಾಡುವವರಿಗೂ ಸಮಾನ ಮಟ್ಟದ ಸೌಲಭ್ಯಗಳನ್ನು ಒದಗಿಸಿಕೊಡದಿದ್ದಲ್ಲಿ ಕನ್ನಡದ ಏಳಿಗೆಗಾಗಿ ಶ್ರಮಿಸಲು ಬರುವವರ ಸಂಖ್ಯೆ ಹಾಗೂ ಗುಣಮಟ್ಟ ಕೆಳಮುಖವಾಗುವ ಸಂಭವವಿರುತ್ತದೆ.

ಈ ನಿಟ್ಟಿನಲ್ಲಿ ನಾವೆಲ್ಲರೂ ಶ್ರಮಿಸೋಣ.

ಹೊಂಗನಸು ಪತ್ರಿಕೆಯನ್ನು ಹೆಚ್ಚು ವರ್ಣ ರಂಜಿತ ಹಾಗೂ ಹೆಚ್ಚು ಉಪಯುಕ್ತವಾಗಿ ಮಾಡಲು ಶ್ರಮಿಸುತ್ತಿದ್ದೇವೆ. ನಿಮ್ಮ ಸಲಹೆಗಳು ಹಾಗೂ ಪ್ರತಿಕ್ರಿಯೆಗಳಿಗೆ ಸ್ವಾಗತ.

ಬಿ.ಆರ್ ರವೀಂದ್ರನಾಥ್
ಸಂಪಾದಕರು.......

### ಜುಲೈ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಫ.ಗು. ಹಳಕಟ್ಟಿ | 2–7–1880 |
| ದೇ. ಜವರೇಗೌಡ | 6–7–1915 |
| ಟಿಪಿ ಕೈಲಾಸಂ | 9–7–1884 |
| ಆಲೂರ ವೆಂಕಟರಾಯರು | 12–7–1880 |
| ರಂ ಶ್ರೀ ಮುಗಳಿ | 15–7–1906 |
| ಬಿಎಲ್‌ರೈಸ್ | 17–7–1837 |
| ಶಾಂತಿನಾಥ ದೇಸಾಯಿ | 22–7–1929 |
| ಜಿ.ಬಿ. ಜೋಶಿ | 29–7–1904 |
| ಮಧುರ ಚೆನ್ನ | 31–7–1903 |

### ಜುಲೈ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಆನಕೃ | 8–7–1971 |
| ಬಿ.ಎಲ್. ರೈಸ್ | 10–7–1927 |
| ನಿರುಪಮಾ | 11–7–2013 |
| ಜಯದೇವಿ ತಾಯಿ ಲಿಗಾಡೆ | 25–7–1986 |
| ತ್ರಿವೇಣಿ | 29–7–1963 |
| ಪಿಕ್ರಿನ್ | ಜುಲೈ 1936 |

## ಸರ್ವಸದಸ್ಯರ ವಿಶೇಷ ಸಭೆ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಸರ್ವಸದಸ್ಯರ ವಿಶೇಷ ಸಭೆಯನ್ನು ದಿನಾಂಕ 1ನೇ ಜುಲೈ 2017 ರಂದು ಬೆಳಿಗ್ಗೆ 10 ಘಂಟೆಗೆ ಏರ್ಪಡಿಸಲಾಗಿದೆ. ಸಭೆಯ ತಿಳುವಳಿಕೆ ಪತ್ರಗಳನ್ನು ಸದಸ್ಯರಿಗೆ ರವಾನಿಸಲಾಗಿದೆ. ಮಾನ್ಯ ಸದಸ್ಯರು ಗುರುತಿನ ಚೀಟಿಯ ಸಮೇತ ಈ ಸಭೆಗೆ ಹಾಜರಾಗಿ ಕಲಾಪಗಳನ್ನು ನಡೆಸಿಕೊಡಬೇಕಾಗಿ ಕೋರಲಾಗಿದೆ

## ವಾರ್ಷಿಕ ಸರ್ವಸದಸ್ಯರ ಸಭೆ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ವಾರ್ಷಿಕ ಸರ್ವಸದಸ್ಯರ ಸಭೆಯನ್ನು ದಿನಾಂಕ 1ನೇ ಜುಲೈ 2017 ರಂದು ಬೆಳಿಗ್ಗೆ 11 ಘಂಟೆಗೆ ಏರ್ಪಡಿಸಲಾಗಿದೆ. ಸಭೆಯ ತಿಳುವಳಿಕೆ ಪತ್ರಗಳನ್ನು ಸದಸ್ಯರಿಗೆ ರವಾನಿಸಲಾಗಿದೆ. ಮಾನ್ಯ ಸದಸ್ಯರು ಗುರುತಿನ ಚೀಟಿಯ ಸಮೇತ ಈ ಸಭೆಗೆ ಹಾಜರಾಗಿ ಕಲಾಪಗಳನ್ನು ನಡೆಸಿಕೊಡಬೇಕಾಗಿ ಕೋರಲಾಗಿದೆ

### ಬಿ.ಎಂ.ಶ್ರೀ ಪ್ರತಿಷ್ಠಾನದ ನೂತನ ಪ್ರಯೋಗ
### ಸಾಹಿತ್ಯಾಸಕ್ತರಿಗೆ ಉಚಿತ ಪುಸ್ತಕ ವಿತರಣೆ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನವು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕಳೆದ 37 ವರ್ಷಗಳಿಂದ ಅವಿರತವಾಗಿ ಸೇವೆ ಸಲ್ಲಿಸುತ್ತಿದೆ. ಪ್ರತಿಷ್ಠಾನವು ಪ್ರತಿ ತಿಂಗಳು ಆರಕ್ಕೆಕಡಿಮೆಯಿಲ್ಲದಂತೆ ಸಾಹಿತ್ಯಕ ಕಾರ್ಯಕ್ರಮಗಳನ್ನು ನಡೆಸುತ್ತಿದೆ. ಸಾಹಿತ್ಯಾಸಕ್ತರು ಹಾಗೂ ಸಾರ್ವಜನಿಕರು ಈ ಕಾರ್ಯಕ್ರಮಗಳಲ್ಲಿ ಉತ್ತಮ ಸಂಖ್ಯೆಯಲ್ಲಿ ಭಾಗವಹಿಸುತ್ತಿರುತ್ತಾರೆ. ಸಾಹಿತ್ಯಾಸಕ್ತರು ಹಾಗೂ ಸಾರ್ವಜನಿಕರು ಕನ್ನಡ ಸಾಹಿತ್ಯದಲ್ಲಿ ಹೆಚ್ಚಿನ ಅಭಿರುಚಿಯನ್ನು ಬೆಳೆಸಿಕೊಳ್ಳುವುದನ್ನು ಪ್ರೋತ್ಸಾಹಿಸಲು ಇನ್ನು ಮುಂದೆ ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಎಲ್ಲ ಸಾಹಿತ್ಯಾಸಕ್ತರಿಗೆ ಕೊಡುಗೆಯಾಗಿ ಪ್ರತಿಷ್ಠಾನವು ತನ್ನ ಪ್ರಕಟಣೆಗಳ ಪ್ರತಿಗಳನ್ನು ಉಚಿತವಾಗಿ ನೀಡಲಾಗುವುದು. ಈ ಕೊಡುಗೆಯ ಸದುಪಯೋಗವನ್ನು ಪಡೆದುಕೊಳ್ಳಬೇಕೆಂದು ವಿನಂತಿ.

ಪ್ರಕಟಣೆ

### ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಚೇರಿ ಭಾನುವಾರಗಳಂದು ತೆರೆದಿರುತ್ತದೆ

ದಿನಾಂಕ 7ನೇ ಮೇ 2017ರಿಂದ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಚೇರಿ ಹಾಗೂ ಇತರ ಸೇವೆಗಳು ಭಾನುವಾರದಂದು ಸಾರ್ವಜನಿಕರಿಗೆ, ಸದಸ್ಯರಿಗೆ ಹಾಗೂ ಸಾಹಿತ್ಯಾಸಕ್ತರಿಗೆ ಲಭ್ಯ ಮಾಡಿಕೊಡುವ ಉದ್ದೇಶದಿಂದ ವಾರದ ರಜಾ ದಿನವನ್ನು ಬದಲಿಸಲಾಗಿದೆ. ಇನ್ನು ಮುಂದೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಚೇರಿ ಹಾಗೂ ಇತರ ಸೇವೆಗಳು ಪೂರ್ಣಪ್ರಮಾಣವಾಗಿ ಭಾನುವಾರ ಬೆಳಿಗ್ಗೆ 10.00 ಯಿಂದ ಸಂಜೆ 5.00 ವರೆಗೆ ಲಭ್ಯವಿರುತ್ತದೆ. ಪ್ರತಿ ಮಂಗಳವಾರ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಚೇರಿಗೆ ವಾರದ ರಜೆಯಿರುತ್ತದೆ.

## ಆಧುನಿಕ ವಚನಗಳು

–ಜಿ. ಅಬ್ದುಲ್ ಬಷೀರ್

**ಮಾತು ಮಾತಿಗೆ ಫೀಂಕರಿಸುವ ಅಧಿಕಾರಿಗಳ ಕಂಡೆ**
**ಮಾತು ಮಾತಿಗೆ ಟೀಕಿಸುವ ಅಧಿಕಾರಳ ಕಂಡೆ**
**ಮಾತು ಮಾತಿಗೆ ತಿರಸ್ಕರಿಸುವ ಅಧಿಕಾರಿಗಳ ಕಂಡೆ**
**ಮಾತು ಮಾತಿಗೆ ಹಣಕ್ಕೆ ಕೈಯೊಡ್ಡುವ ಅಧಿಕಾರಿಗಳ ಕಂಡೆ**
**ಮಾತು ಮಾತಿಗೆ ಅಸೂಯೆಪಡುವ ಅಧಿಕಾರಗಳ ಕಂಡೆ**
**ಮಾತು ಮಾತಿಗೆ ಜಾತಿಬಲದ ಮಾತಾಡುವ ಅಧಿಕಾರಿಗಳ ಕಂಡೆ**
**ಮಾನವೀಯತೆಯ ಮರೆವ ಅಧಿಕಾರಿಗಳ ನಾ ಕಾಣದದೆನಯ್ಯಾ**
**ಭಕ್ತಪ್ರಿಯ 'ಅಲ್ಲಾರಖಾ'! ॥22॥**

# ಜುಲೈ 2017 ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ



**02–07–2017 ಭಾನುವಾರ ಬೆಳಿಗ್ಗೆ 10:00 ಗಂಟೆಗೆ**

ಶ್ರೀ ಗೋವಿಂದ ಜಾಲಿಹಾಳ ದತ್ತಿ

ವಿಷಯ : ಭಕ್ತಿಗೀತೆಗಳ ಸ್ಪರ್ಧೆ




**5–7–2017 ಬುಧವಾರ ಸಂಜೆ– 6:00 ಗಂಟೆಗೆ**

ಗಮಕವಾಹಿನಿ–18

ಹೆಸರು: ಪಂಪಭಾರತಸಂಚಿಕೆ–5

ವಾಚನ : ಕು. ರಕ್ಷಿತಾ ಕೆ.

ವ್ಯಾಖ್ಯಾನ : ಪ್ರೊ॥ ಟಿ.ಎಸ್. ರಘುನಾಥ್, ನಿವೃತ್ತ ಕನ್ನಡ ಪ್ರಾಧ್ಯಾಪಕರು

ನೇತೃತ್ವ– ಶ್ರೀಮತಿ ಸಿ.ವಿ. ಶ್ರೀಮತಿ



**12–07–2017 ಬುಧವಾರ ಸಂಜೆ 6:00 ಗಂಟೆಗೆ**

"ಅಕ್ಕರಗೊಟ್ಟಿ"

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : "ಕುಮಾರವ್ಯಾಸ ಭಾರತ ಮತ್ತು ತಂತ್ರಾಂಶಃ ಕೆಲವು ಸಮಸ್ಯೆಗಳು"

ಚಾಲನೆ: ಶ್ರೀ ನರಸಿಂಹ ಮೂರ್ತಿ ಜಿ.ಎನ್. ಕಾರ್ಯದರ್ಶಿ, ಕನ್ನಡ ಗಣಕ ಪರಿಷತ್ತು



**17–07–2017 ಸೋಮವಾರ ಸಂಜೆ –6:00 ಗಂಟೆಗೆ**

ಕನ್ನಡ ಸಂಸ್ಕೃತಿ ದರ್ಶನ

ಕನ್ನಡ ಸಾಂಸ್ಕೃತಿಕ ಸಾಕ್ಷ್ಯಚಿತ್ರ ಪ್ರದರ್ಶನ



**22–07–2017 ಶನಿವಾರ ಸಂಜೆ 6:00 ಗಂಟೆಗೆ**

ರಂಗಸಂವಾದ–12

ನಾಟಕ : ತೇಜೋ ಮುಖ (ನೈಜ ಘಟನೆ ಆಧಾರಿತ ನಾಟಕ)

ರಚನೆ & ನಿರ್ದೇಶನ : ಶ್ರೀ ವಿಜಯ್ ಎ.



**26–07–2017ಬುಧವಾರ ಸಂಜೆ 6–00 ಗಂಟೆಗೆ**

ರಾಸ ಸಾಹಿತ್ಯ, ಡಿ.ಲಿಂಗಯ್ಯ, ಟಿ.ಎಸ್.ವೆಂಕಣ್ಣಯ್ಯ,

ತೀ.ನಂ.ಶ್ರೀ. ಶಾರದಾ ಹನುಮಯ್ಯ

ವಿಷಯ : 'ಹವಾಮಾನ ಬದಲಾವಣೆ ಮತ್ತು ಜ್ವಾಲಾಮುಖಿಗಳ ಪಾತ್ರ'

ಉಪನ್ಯಾಸಕರು: ಡಾ॥ ಎಚ್.ಎಸ್.ಎಂ. ಪ್ರಕಾಶ್



## ಜುಲೈ ತಿಂಗಳಿನಲ್ಲಿ ನಡೆಯುವ ದತ್ತಿ ಕಾರ್ಯಕ್ರಮಗಳಿಗೆ ಸಂಬಂಧಿಸಿದ ದತ್ತಿ ನಿಧಿಗಳ ಸಂಕ್ಷಿಪ್ತ ವಿವರಗಳು

| ಕ್ರ.ಸಂ | ದತ್ತಿ ಹೆಸರು | ಸ್ಥಾಪಕರು | – ವಿಷಯ |
|---|---|---|---|
| 1 | ಟಿ.ಎನ್. ವೆಂಕಣ್ಣಯ್ಯ ದತ್ತಿ | – ಬೆಳಗೆರೆ ಕೃಷ್ಣಶಾಸ್ತ್ರಿ | – ಉಪನ್ಯಾಸ |
| 2 | ಡಿ.ಲಿಂಗಯ್ಯದತ್ತಿ | – ಅವರ ಕುಟುಂಬದವರು ಹಾಗೂ ಪ್ರತಿಷ್ಠಾನದ ಸದಸ್ಯರು | – ಉಪನ್ಯಾಸ |
| 3 | ತೀ.ನಂ.ಶ್ರೀ | – ಪ್ರೊ॥ ಟಿ.ಎಸ್. ನಾಗಭೂಷಣ | – ಉಪನ್ಯಾಸ |
| 4 | ಶ್ರೀ ಶಾರದಾ ಹನುಮಯ್ಯ | – ಡಾ॥ ಜಯಮ್ಮ ಕರಿಯಣ್ಣ | – ಪುಸ್ತಕ ಬಹುಮಾನ |
| 5 | ರಾಸ ಸಾಹಿತ್ಯ | – ಸಮೇತನಹಳ್ಳಿ ರಾಮರಾಯರು | – ಸ್ಪರ್ಧೆ/ವಿಮರ್ಶಾ. ಪ್ರಬಂಧ |
| 6. | ಶ್ರೀ ಗೋವಿಂದ ಜಾಲಿಹಾಳ್ | – ಮಿಲಿಂದ್ ಜಾಲಿಹಾಳ್ | – ಭಕ್ತಿಗೀತೆ ಸ್ಪರ್ಧೆ |

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಮೇ 2017 – ಜೂನ್ 2017 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

## "ರಂಗ ಸಂವಾದ–8"

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ಗ್ರೀನ್ ಸ್ಟೇಜ್ ಸಹಯೋಗದಲ್ಲಿ ನಾಟಕ

ನಾಟಕ : "ನಮ್ಮನ್ನು ಬದುಕಲು ಬಿಡಿ"

ರಚನೆ : ಶ್ರೀ ವಿಜಯ್ ಎ.

ನಿರ್ದೇಶನ : ಶ್ರೀ ವಿಜಯ್ ಎ.

ಪ್ರತಿ ತಿಂಗಳೂ ಕೊನೆಯ ಶನಿವಾರ ಸಂಜೆ ನಡೆಯುವ ಬಿ. ಎಂ.ಶ್ರೀ. ಪ್ರತಿಷ್ಠಾನ ಮತ್ತು ಗ್ರೀನ್ ಸ್ಟೇಜ್ ಸಹಯೋಗದಲ್ಲಿ ನಡೆಸಲಾಗುವ 'ರಂಗ ಸಂವಾದ' ಕಾರ್ಯಕ್ರಮದಲ್ಲಿಸಾಮಾಜಿಕ ಚಿಂತನೆಗಳನ್ನು ಒಳಗೊಳ್ಳುವ ನಾಟಕಗಳ ಪ್ರದರ್ಶನ ಮಾಡಲಾಗುತ್ತದೆ. ದಿನಾಂಕ 27ನೇ ಮೇ 2017ರಂದು "ನಮ್ಮನ್ನು ಬದುಕಲು ಬಿಡಿ" ನಾಟಕವನ್ನು ಪ್ರದರ್ಶಿಸಲಾಯಿತು. ಡಾ. ಪಿ ವಿ ನಾರಾಯಣ ಅವರು ಸ್ವಾಗತವನ್ನು ಕೋರಿ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಡಾ. ಅನಿಲ್ ಕುಮಾರ್ ವಂದನಾರ್ಪಣೆ ಸಲ್ಲಿಸಿದರು.

## ಗಮಕವಾಹಿನಿ–16

07–06–2017 ಹೆಸರು: ಪಂಪಭಾರತ – 4

ವಾಚನ– ಡಾ॥ ಸುಬ್ರಹ್ಮಣ್ಯಸ್ವಾಮಿ

ವ್ಯಾಖ್ಯಾನ– ಶ್ರೀಮತಿ ಬಿ.ಸಿ.ವಿಶಾಖಾ

ನೇತೃತ್ವ– ಶ್ರೀಮತಿ ಶ್ರೀಮತಿ

07–06–2017ರಂದು ಪ್ರತಿ ತಿಂಗಳ ಮೊದಲ ಬುಧವಾರ ನಡೆಯುವ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನದ ಜಂಟಿ ಕಾರ್ಯಕ್ರಮವಾದ ಗಮಕವಾಹಿನಿ ಅಡಿಯಲ್ಲಿ ಶ್ರೀಮತಿ, ಶ್ರೀಮತಿಯವರ ನೇತೃತ್ವದಲ್ಲಿ "ಪಂಪಭಾರತ–4" ಗಮಕವಾಹಿನಿ–ಮಾಲೆಯನ್ನು ಹಮ್ಮಿಕೊಂಡಿದೆ. ಪಂಪಭಾರತದ ಸಂಗ್ರಹ ರಚನೆ ಡಾ॥ ಪಿ.ವಿ.ನಾರಾಯಣ.

ನಾಲ್ಕನೇ ಕಂತಿನ ಭಾಗವಾಗಿ ಶ್ರೀಮತಿ ಬಿ.ಸಿ.ವಿಶಾಖಾ ಸುಶ್ರಾವ್ಯವಾಗಿ ವಾಚನ ಮಾಡಿದರು. ವ್ಯಾಖ್ಯಾನದ ಭಾಗವನ್ನು ವ್ಯಾಖ್ಯಾನದಲ್ಲಿ ಪರಿಣಿತರಾದ ಡಾ॥ ಸುಬ್ರಹ್ಮಣ್ಯಸ್ವಾಮಿ ಅವರು ನೀಡಿ ಗಮಕಾಸಕ್ತರ ಮೆಚ್ಚುಗೆಗಳಿಸಿದರು.

## "ಅಕ್ಕರಗೊಟ್ಟಿ"

14–06–2017

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : ರಾವಳೇಶ್ವರ ಆರಾಧನೆ– ರಾವಳೇಶ್ವರ ಒಕ್ಕಲುಗಳು– ಒಂದು ಚಿಂತನೆ

ಚಾಲನೆ: ಡಾ॥ ಎನ್.ಆರ್. ಲಲಿತಾಂಬ

ಜೂನ್ ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ "ಅಕ್ಕರಗೊಟ್ಟಿ" ಕಾರ್ಯಕ್ರಮದಲ್ಲಿ "ರಾವಳೇಶ್ವರ ಆರಾಧನೆ– ರಾವಳೇಶ್ವರ ಒಕ್ಕಲುಗಳು : ಒಂದು ಚಿಂತನೆಗೆ ಚಾಲನೆ ನೀಡಿದ, ಡಾ॥ ಎನ್.ಆರ್. ಲಲಿತಾಂಬ, ಕನ್ನಡ ಪ್ರಾಧ್ಯಾಪಕರು, ಸರ್ಕಾರಿ ಕಾಲೇಜು, ವಿಜಯನಗರ ಮತ್ತು ಅವರ ವಿದ್ಯಾರ್ಥಿ ಶ್ರೀ ಹರೀಶ್ ಅವರು ಈ ಕೆಳಕಂಡ ವಿಚಾರಗಳನ್ನು ಮಂಡಿಸಿದರು.

ರಾವಣ>ರಾವಳ : ಎರಡೂ ಉಚ್ಚಾರಣಾ ರೂಪಗಳು ರೂಢಿಯಲ್ಲಿವೆ.

ಜನಮಾನಸದಲ್ಲಿ ರಾವಣನಿದ್ದಾನೆಯೇ? ರಾವಣನ ಆರಾಧನಾ ಒಕ್ಕಲುಗಳಿದೆಯೇ? ಎಲ್ಲಿ ಹೇಗೆ? ಯಾವ ಜನಾಂಗ, ಯಾವ ಸಮುದಾಯ? ರಾವಣನ ಆರಾಧನೆ ಒಂದು ಪಂಥವೇ? ರಾವಳೇಶ್ವರನ ಉಲ್ಲೇಖ ಶಾಸನಗಳಲ್ಲಿ ಕಂಡು ಬಂದಿದೆಯೇ? ಮಂಡ್ಯ ಜಿಲ್ಲೆಯ ನಿಡಘಟ್ಟದಲ್ಲಿ ರಾವಳೇಶ್ವರನ ದೇವಸ್ಥಾನ, ಅಲ್ಲಿಯ ಮುಡಿ ಆಚರಣೆ, ರಾವಳೇಶ್ವರನ




ಶಿಲ್ಪಗಳೆಂದು ಪೂಜಿಸಲ್ಪಡುವ ಕಲ್ಲಿನ ಶಿಲ್ಪಗಳು, (ವೀರಗಲ್ಲುಗಳಂತೆ) ಯಥೇಚ್ಛವಾಗಿ ಇಂದಿಗೂ ಕಂಡು ಬರುವ ಪುನ್ನಾಟ ಪ್ರದೇಶ, ಹೀಗೆ ಹಲವಾರು ವಿಷಯಗಳ ಬಗ್ಗೆ ಸುದೀರ್ಘವಾದ ಕ್ಷೇತ್ರ ಕಾರ್ಯದ ಹಿನ್ನೆಲೆಯನ್ನು ನೀಡಿ ಚರ್ಚೆಗೆ ಆಹ್ವಾನಿಸಿದರು. ರಾವಳೇಶ್ವರನ ಆರಾಧನೆಯು ಸಮೂಹ ಸಮ್ಮತ ಪದ್ಧತಿಯಾಗಿದ್ದಲ್ಲಿ, ಅದರ ಉಗಮ ಎಲ್ಲಿಂದ ಆರಂಭವಾಯಿತು? ಮತ್ತು ಯಾವ ಕಾಲಘಟ್ಟದಿಂದ ಆರಂಭವಾಯಿತು? ಹೀಗೆ ಹಲವಾರು ಪ್ರಶ್ನೆಗಳಿಗೆ ಖಚಿತಮಾಹಿತಿಗಾಗಿ, ಸಲಹೆ ಮತ್ತು ಸೂಚನೆಗಳನ್ನು ಸ್ವೀಕರಿಸಿ ಕಾರ್ಯಕ್ರಮ ಮುಕ್ತಾಯಗೊಂಡಿತು. ಡಾ॥ ಜಯಂತಿ ಮನೋಹರ್, ಡಾ॥ ನಳಿನಿವೆಂಕಟೇಶ್, ಶ್ರೀ ಕೆ.ವಿ. ವಿಜಯೇಂದ್ರ, ಶ್ರೀ ಸಿ.ಕೆ.ರಾಮೇಗೌಡ, ಡಾ.ಪಿ.ವಿ.ನಾರಾಯಣ ಸಕ್ರಿಯವಾಗಿ ಚರ್ಚೆಯಲ್ಲಿ ಭಾಗವಹಿಸಿದ್ದರು.

ನಮ್ಮ ಸದಸ್ಯರೇ ಆದ ಉಪನ್ಯಾಕರನ್ನು ಪ್ರಾರಂಭದಲ್ಲಿ ಡಾ.ಪಿ.ವಿ.ನಾರಾಯಣ ಅವರು ಸಬೆಗೆ ಪರಿಚಯ ಮಾಡಿದರು. ಶ್ರೀ ಗುರುಪ್ರಸಾದ್ ಅವರು ಉಪನ್ಯಾಸಕರಿಗೆ ಹಾಗೂ ಸಭೆಗೆ ವಂದಿಸಿದರು.

ವಿಸೂ.: ಅಕ್ಕರಗೊಟ್ಟಿ ಕಾರ್ಯಕ್ರಮವನ್ನು ದಿನಾಂಕ 12ನೇ ಜೂನ್ 2017 ರಂದು ನಡೆಸಲು ಆಯೋಜಿಸಲಾಗಿದ್ದರೂ, ಅಂದಿನ ದಿನದಂದು ಕರ್ನಾಟಕ ಬಂದ್ ಆಚರಿಸಲು ಕೆಲ ಸಂಘಟನೆಗಳು ಕರನೀಡಿದ್ದ ಹಿನ್ನಲೆಯಲ್ಲಿ ಈ ಕಾರ್ಯಕ್ರಮವನ್ನು ಮುಂದೂಡಲಾಗಿತ್ತು.

## ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ

ದಿನಾಂಕ 15ನೇ ಜೂನ್ 2017ರಂದು ನಿರಂಜನ ಹಾಗೂ ಅ.ನ. ಕೃಷ್ಣರಾಯ ಅವರ ಬಗ್ಗೆಯ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶಿಸಲಾಯಿತು.

## ಸಂಶೋಧನ ದಿನ

19–6–2017– ಎಂ.ಫಿಲ್ ಪದವಿ ಪತ್ರ ಪ್ರದಾನ ಮತ್ತು ಅಧ್ಯಕ್ಷತೆ: ಡಾ॥ ಪದ್ಮಾ ಶೇಖರ್, ಕುಲಪತಿಗಳು ಸಂಸ್ಕೃತ ವಿಶ್ವವಿದ್ಯಾಲಯ

ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ ನಡೆಸುವ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವೀಧರರಿಗೆ ಪದವಿ ಪತ್ರ ಪ್ರದಾನ ಕಾರ್ಯಕ್ರಮವನ್ನು ಡಾ॥ ಪದ್ಮಾ ಶೇಖರ್, ಮಾನ್ಯ ಕುಲಪತಿಗಳು ಸಂಸ್ಕೃತ ವಿಶ್ವವಿದ್ಯಾಲಯ ಅವರು ನಡೆಸಿಕೊಟ್ಟರು. ಅವರು ಸಂಶೋಧನೆ ಬಗ್ಗೆ ಆಳವಾದ ಚಿಂತನೆಗಳುಳ್ಳ ಉಪನ್ಯಾಸ ನೀಡಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಿದರು. ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನದ ಸಂಯೋಜನಾಧಿಕಾರಿ ಡಾ. ವಿಜಯಾ ಸುಬ್ಬರಾಜು ಅವರು ತರಗತಿಗಳ ಬಗ್ಗೆ ಮಾಹಿತಿಗಳನ್ನು ನೀಡಿದರು.



ಮೊದಲಿಗೆ ಡಾ. ಪಿ.ವಿ. ನಾರಾಯಣ ಅವರನ್ನು ಸ್ವಾಗತಿಸಿ ಮುಖ್ಯ ಅತಿಥಿ ಅವರ ಪರಿಚಯ ಮಾಡಿಕೊಟ್ಟರು.

ರವೀಂದ್ರನಾಥ್ ಅವರು ವಂದನಾರ್ಪಣೆ ಸಲ್ಲಿಸಿದರು.

**2016–17 ಸಾಲಿನಲ್ಲಿ ಎಂ.ಫಿಲ್ ಪದವಿ ಪಡೆದ ವಿದ್ಯಾರ್ಥಿಗಳ ವಿವರ**

1. ಶ್ರೀ ನರಸಿಂಹ
2. ಶ್ರೀಮತಿ ಜಿ.ಬಿ.ಮಹೇಶ್ವರಿ
3. ಶ್ರೀ ಪಿ.ರುದ್ರಮುನಿ
4. ಶ್ರೀ ಎಂ.ಮನೋಜ್
5. ಶ್ರೀ ಬಿ.ಸಿ.ನವೀನ್ ಕುಮಾರ್
6. ಶ್ರೀ ಆರ್.ಡಿ. ಶ್ರೀಧರ್
7. ಶ್ರೀಮತಿ ಎಸ್. ಸರಸ್ವತಿ
8. ಶ್ರೀಮತಿ ರಾಜೇಶ್ವರಿಹಳ್ಳೂರ
9. ಶ್ರೀಮತಿ ಪಿ.ಎನ್. ಸರಸ್ವತಿ

## 2016–17ನೇ ಸಾಲಿನಲ್ಲಿ ಪ್ರತಿಷ್ಠಾನವು ನಡೆಸಿದ ಕಾರ್ಯಕ್ರಮಗಳ ವಿವರ

| ಕಾರ್ಯಕ್ರಮಗಳು | ಸಂಖ್ಯೆ |
|---|---|
| ಪ್ರಶಸ್ತಿ ಪ್ರದಾನ ಕಾರ್ಯಕ್ರಮಗಳು | 6 |
| ದತ್ತಿನಿಧಿ ಉಪನ್ಯಾಸ ಕಾರ್ಯಕ್ರಮಗಳು/ಸ್ಪರ್ಧೆ+ ಭಕ್ತಿಗೀತೆ | 17 |
| ಅಕ್ಕರಗೊಟ್ಟಿ ಕಾರ್ಯಕ್ರಮಗಳು | 12 |
| ಕನ್ನಡ ಸಂಸ್ಕೃತಿ ಹಾಗೂ ಸಾಕ್ಷ್ಯಚಿತ್ರ ಪ್ರದರ್ಶನ | 11 |
| ವಚನವಿಹಾರ | 2 |
| ಗಮಕವಾಹಿನಿ ಮಾಲೆ | 12 |
| ಕೃತಿಚಿತ್ರ | 6 |
| ರಂಗಸಂವಾದ | 8 |
| ಇತರ ಸಂಘ ಸಂಸ್ಥೆಗಳ ಸಹಯೋಗದಲ್ಲಿ ನಡೆದಕಾರ್ಯಕ್ರಮ | 2 |
| ಹಳಗನ್ನಡ ತರಗತಿ ಉದ್ಘಾಟನಾ ಮತ್ತು ಸಮಾರೋಪ ಕಾರ್ರ್ಯಕ್ರಮ | 1 |
| ಲಿಫ್ಟ್ ಉದ್ಘಾಟನೆ | 1 |
| ಇತರ ಕಾರ್ಯಕ್ರಮಗಳು | 5 |
| **ಒಟ್ಟು** | **83** |

## ಸೇವಾ ಶುಲ್ಕ ಕಡಿತ

ಸಂಘ ಸಂಸ್ಥೆಗಳು ನಡೆಸುವ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಲು ಅನುಕೂಲ ಮಾಡಿಕೊಡಲು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸಭಾಂಗಣಗಳ ಸೇವಾ ಶುಲ್ಕ ಗಳನ್ನು ಗಣನೀಯವಾಗಿ ಕಡಿತಗೊಳಿಸಲಾಗಿದೆ

ಸಭಾಂಗಣಗಳ ಸೇವಾ ಶುಲ್ಕವನ್ನು ದಿನಾಂಕ 1–6–2017ರಿಂದ ಜಾರಿಗೆ ಬರುವಂತೆ ಈ ಕೆಳಕಂಡಂತೆ ಪರಿಷ್ಕರಿಸಲಾಗಿದೆ. ಬಳಕೆದಾರರು ಎಂದಿನಂತೆ ಸಹಕರಿಸಬೇಕಾಗಿ ಕೋರಿಕೆ.

**ಸಭಾಂಗಣಗಳ ಸೇವಾ ಶುಲ್ಕದ ವಿವರ**

| | ಎಂವಿಸೀ ಸಭಾಂಗಣ | ಶಾ.ಬಾಲೂರಾವ್ ಮಾತಿನಮನೆ | ತರಗತಿ ಕೊಠಡಿ |
|---|---|---|---|
| **1) ಸೋಮವಾರದಿಂದ ಶನಿವಾರದವರೆಗೆ** | | | |
| ಬೆಳಿಗ್ಗೆ 10–30 ರಿಂದ 2–00ರ ವರೆಗೆ ಅಥವಾ | 1,000 | 500 | 500 |
| ಮಧ್ಯಾಹ್ನ 3–30 ರಿಂದ 7–00ರ ವರೆಗೆ | 1,000 | 500 | 500 |
| ಬೆಳಿಗ್ಗೆ 10–30 ರಿಂದ ಸಂಜೆ 7–00ರ ವರೆಗೆ | 2,000 | 1,000 | 1,000 |
| **2) ಭಾನುವಾರ ಹಾಗೂ ಸರ್ಕಾರಿ ರಜಾ ದಿನಗಳಲ್ಲಿ** | | | |
| ಬೆಳಿಗ್ಗೆ 10–30 ರಿಂದ 2–00ರ ವರೆಗೆ ಅಥವಾ | 2,500 | 1,000 | 1,000 |
| ಮಧ್ಯಾಹ್ನ 2–00 ರಿಂದ 5–00ರ ವರೆಗೆ | 2,500 | 1,000 | 1,000 |
| ಬೆಳಿಗ್ಗೆ 10–30 ರಿಂದ ಸಂಜೆ 5–00ರ ವರೆಗೆ | 5,000 | 2,000 | 2,000 |

ವಿ.ಸೂಚನೆ: ಎಲ್.ಇ.ಡಿ. ಪ್ರೊಜೆಕ್ಟರ್ ಬಳಕೆಗೆ ರೂ. 250/– ಪ್ರತಿ 3 1/2 ಘಂಟೆಗಳ ಬಳಕೆಗೆ ಹೆಚ್ಚುವರಿ ಶುಲ್ಕ

ಹವಾ ನಿಯಂತ್ರಕ ವ್ಯವಸ್ಥೆ ಬಳಕೆಗೆ ರೂ. 250/– ಪ್ರತಿ 3 1/2 ಘಂಟೆಗಳ ಬಳಕೆಗೆಹೆಚ್ಚುವರಿ ಶುಲ್ಕ

ಸಭಾಂಗಣ ಶುಲ್ಕವನ್ನು ಪೂರ್ಣವಾಗಿ ಪಾವತಿಸಿ ಸಭಾಂಗಣವನ್ನು ಕಾಯ್ದಿರಿಸುವುದು. ಅಲ್ಲದೆ ರೂ. 1,000/–(ರೂ.ಒಂದು ಸಾವಿರ)ವನ್ನು ಮುಂಗಡವಾಗಿ ಕೊಡತಕ್ಕದ್ದು. ಮುಂಗಡ ಹಣವನ್ನು ಕಾರ್ಯಕ್ರಮದ ನಂತರ ಹಿಂತಿರುಗಿಸಲಾಗುವುದು.

ವಿ.ಸೂ : 1) ತಿಂಡಿ–ಪಾನೀಯಗಳನ್ನು ಸಭಾಂಗಣದೊಳಗೆ ಸೇವಿಸಲು ಅನುಮತಿ ಇಲ್ಲ.

2) ಸಭಾಂಗಣಗಳ ಆಸ್ತಿ ಪಾಸ್ತಿಗಳಿಗೆ ಹಾನಿಯಾದಲ್ಲಿ ಸಂಘಟಕರು ಜವಾಬ್ದಾರಿ ವಹಿಸಿಕೊಳ್ಳತಕ್ಕದ್ದು.

3) ಸಂಘಸಂಸ್ಥೆಗಳು ನಡೆಸುವ ಸಾಂಸ್ಕೃತಿಕ ಕಾರ್ಯಕ್ರಮಗಳಿಗಾಗಿ ಮಾತ್ರ ಎಂ.ವಿ.ಸೀ. ಸಭಾಂಗಣವನ್ನು ನೀಡಲಾಗುವುದು.

4) ಕೌಟುಂಬಿಕ ಕಾರ್ಯಕ್ರಮಗಳಿಗೆ ಸಭಾಂಗಣಗಳನ್ನು ನೀಡಲಾಗುವುದಿಲ್ಲ.

# ಪದಚರಿತೆ

## ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ

– ಡಾ. ಪಿ.ವಿ. ನಾರಾಯಣ

ಗೌಡ: ಈ ಶಬ್ದ ಕನ್ನಡದಲ್ಲಿ ಸುಪರಿಚಿತವಾದುದು. ಆದರೆ ಇದು ಅಚ್ಚ ಕನ್ನಡ ಪದವೇನಲ್ಲ; ಸಂಸ್ಕೃತದ ಎರಡು ಪದಗಳು ಸೇರಿ ಬರಬರುತ್ತ ಸ್ವರೂಪವನ್ನು ಬದಲಾಯಿಸಿಕೊಳ್ಳುತ್ತ ಈಗ ಈ ರೂಪದಲ್ಲಿದೆ: ಹಳ್ಳಿಯ ಹಿರಿಯ ಎಂಬರ್ಥದಲ್ಲಿ ಗ್ರಾಮ+ವೃದ್ಧ ಪದಗಳು ಸೇರಿ ಪ್ರಾಕೃತದಲ್ಲಿ ಗಾಂಉಡ>ಗವುಂಡ>ಗೌಂಡ>ಗೌಡ ಎಂಬ ಕ್ರಮದಲ್ಲಿ ಬದಲಾಗಿದೆಯೆಂಬುದು ಕೆಲವು ಭಾಷಾವಿಜ್ಞಾನಿಗಳ ಊಹೆ; 'ಗ್ರಾಮಕೂಟ' ಎಂಬ ಶಬ್ದದಿಂದ ಗೌಡ ಬಂದಿದೆಯೆಂಬುದು ಮತ್ತೂ ಕೆಲವರ ವಾದ. 'ಗಾಮುಣ್ಡ' ಎಂಬ ರೂಪವು ಆರನೆಯ ಶತಮಾನದ್ದೆಂದು ಬಗೆಯಲಾದ ಶಾಸನವೊಂದರಲ್ಲಿ ಕಾಣಿಸುತ್ತದೆ; 'ಗಾಮುಂಡಂ' ಎಂಬ ರೂಪವು 'ವಡ್ಡಾರಾಧನೆ'ಯಲ್ಲಿಯೂ ದೊರೆಯುತ್ತದೆ. 'ಧರ್ಮಾಮೃತ'ವೆಂಬ ನಯಸೇನನ ಹನ್ನೆರಡನೆಯ ಕಾವ್ಯದಲ್ಲಿಯೂ, ಶಾಸನದಲ್ಲಿಯೂ 'ಗೌಂಡ' ಎಂಬ ರೂಪವು ದೊರೆಯುತ್ತದೆ. 'ಗೌಡ' ಎಂಬ ಶಬ್ದದ ಅತ್ಯಂತ ಪ್ರಾಚೀನ ಬಳಕೆ ಹದಿಮೂರನೆಯ ಶತಮಾನದ ಕವಿ ರಾಘವಾಂಕನ 'ಸಿದ್ಧರಾಮ ಚಾರಿತ್ರ'ದಲ್ಲಿದೆ. ತಮಿಳಿನಲ್ಲಿ ಗೌಂಡರ್ ಎಂಬ ರೂಪವೂ ತೆಲುಗಿನಲ್ಲಿ ಗೌಡು ಎಂಬ ರೂಪವೂ ಬಳಕೆಯಲ್ಲಿದೆ.

ಇದಕ್ಕೆ ವಿವಿಧ ಪ್ರತ್ಯಯಗಳನ್ನು ಸೇರಿಸಿ ಅನೇಕ ಶಬ್ದಗಳನ್ನು ಮಾಡಿಕೊಳ್ಳಲಾಗಿದೆ. ಗೌಡನ ಕೆಲಸ ಎಂಬರ್ಥದಲ್ಲಿ ಗಾವುಂಡಿಕೆ ಎಂಬ ರೂಪವು ಹನ್ನೆರಡನೆಯ ಶತಮಾನದ ನವಲಗುಂದದ ಶಾಸನವೊಂದರಲ್ಲಿ ಸಿಕ್ಕುತ್ತದೆ; ಇದೇ ಮುಂದೆ ಗೌಡಿಕೆ ಎಂದಾಯಿತು. ಇದೇ ಅರ್ಥದಲ್ಲಿ ಗಾವುಂಡತನ ಎಂಬ ರೂಪವೂ ಶಾಸನಗಳಲ್ಲಿ ದೊರೆಯುತ್ತದೆ. ಗೌಡನ ಹೆಂಡತಿ ಎಂಬರ್ಥದಲ್ಲಿ ಗಾವುಂಡಿ ಎಂಬ ರೂಪವುಂಟಾಗಿ ಮುಂದೆ ಅದೇ ಗಾವುಂಡಿತಿ ಎಂದಾಗಿ ಆನಂತರ ಗೌಡಿತಿ ಎಂದಾಗಿದೆ. ಈ ಕೆಲಸವನ್ನು ನಿರ್ವಹಿಸು ಎಂಬರ್ಥದಲ್ಲಿ ಶಾಸನಗಳು 'ಗಾಮುಂಡುಗೆಯ್' ಎಂಬ ರೂಪವನ್ನು ಬಳಸುತ್ತವೆ. ಇದಕ್ಕೆ ಸಂಬಂಧಸೂಚಕ ಪದಗಳು ಸೇರಿ ಗಾಮುಂಡಬ್ಬೆ, ಗಾಮುಂಡಸ್ವಾಮಿ ಎಂಬ ವ್ಯಕ್ತಿನಾಮಗಳಾಗಿಯೂ ಶಾಸನಗಳಲ್ಲಿ ಬಳಕೆಗೊಂಡಿವೆ. ಕೆಲವರು ಗೌಡ ಶಬ್ದವನ್ನು ಜಾತಿಸೂಚಕವಾಗಿಯೂ ಬಳಸುತ್ತಾರೆ.

ಗೌಡ ಎಂಬ ಸ್ವತಂತ್ರ ಸಂಸ್ಕೃತ ಶಬ್ದವೂ ಇದೆ. ಇದು ಉತ್ತರ ಭಾರತದ ಪ್ರದೇಶವೊಂದಕ್ಕೆ ಇದ್ದ ಹೆಸರು. ದಂಡಿ ಎಂಬ ಆಲಂಕಾರಕನ 'ಕಾವ್ಯಾದರ್ಶ' ಎಂಬ ಕೃತಿಯಲ್ಲಿ ಈ ಪ್ರದೇಶದಲ್ಲಿ ಸಂಸ್ಕೃತವನ್ನು ಬರೆಯುತ್ತಿದ್ದ ಬಗೆಯನ್ನು 'ಗೌಡೀ' ರೀತಿ ಎಂದು ಕರೆಯುತ್ತಾನೆ. ಗೌಡರೀತಿ ಎಂದೂ ಇದನ್ನು ಕರೆಯಲಾಗುತ್ತಿತ್ತು. ಸಂಸ್ಕೃತದಲ್ಲಿ ಈ ಪದಕ್ಕೆ ಕಾಕಂಬಿಯ ಮದ್ಯವೆಂಬ ಅರ್ಥವೂ ಇದೆ.

======

ಚಾಟಿ: ಇದು ಸಂಸ್ಕೃತದ ಚರ್ಮಪಟ್ಟಿಕಾ ಎಂಬುದರ ತದ್ಭವ. ಈ ಶಬ್ದವು ಚಮ್ಮಟಿಗೆ ಎಂದಾಗಿ ಆ ಬಳಿಕ ಚಾವಟಿಯಾಗಿ, ನಂತರ ಚಾಟಿಯಾಗಿದೆ. ಎಮೆನೋ ಮತ್ತು ಬರೋ ತಮ್ಮ 'ಎ ದ್ರವಿಡಿಯನ್ ಎಟಿಮೊಲಾಜಿಕಲ್ ಡಿಕ್ಷನರಿ'ಯಲ್ಲಿ ಇತರ ದ್ರಾವಿಡ ಭಾಷೆಗಳ ಅದರ ಜ್ಞಾತಿ ಪದಗಳನ್ನು ನೀಡುತ್ತಾರೆ: ತಮಿಳಿನಲ್ಲಿ ಚಾಟ್ಟಿ, ಚಾಟ್ಟೈ ಎಂದೂ, ತೆಲುಗಿನಲ್ಲಿ ಜಾಟಿ ಎಂದೂ, ಮಲಯಾಳಂನಲ್ಲಿ ಚಾಟ್ಟ ಎಂದೂ ಆಗುತ್ತದಂತೆ. ಅಲ್ಲದೆ ಚಮ್ಮಟಿಗೆ ಎಂಬ ರೂಪವು ತಮಿಳಿನಲ್ಲಿ ಚಮ್ಮಟ್ಟಿ ಎಂದೂ, ತೆಲುಗಿನಲ್ಲಿ ಸಮ್ಮೆಟ ಎಂದೂ, ಮಲಯಾಳಂನಲ್ಲಿ ಚಮ್ಮಟ್ಟಿಕೂಟಂ ಎಂದೂ, ತುಳುವಿನಲ್ಲಿ ಚಮಟಿಗೆ ಎಂದೂ ಆಗುತ್ತದೆಂದು ಅಲ್ಲಿಯೇ ಹೇಳಿ, ಅದಕ್ಕೆ ಕಮ್ಮಾರನ ಸುತ್ತಿಗೆ ಎಂಬ ಅರ್ಥವನ್ನು ನೀಡಿದೆ.

ಚರ್ಮಪಟ್ಟಿಕಾ ಎಂಬುದು ಮೂಲತಃ ಪಗಡೆಯ ಹಾಸು ಎಂಬರ್ಥವನ್ನು ಹೊಂದಿದ್ದರೂ ಕನ್ನಡದಲ್ಲಿ ಚಮ್ಮಟಿಗೆ ಎಂಬುದಕ್ಕೆ ಹಳೆಯ ನಿಘಂಟುಗಳು ಚರ್ಮದಂಡ (ಬಾರುಕೋಲು) ಎಂಬ ಅರ್ಥವನ್ನು ನೀಡುತ್ತವೆ. 'ಶಬ್ದಮಣಿದರ್ಪಣ'ದಲ್ಲಿ "ಚರ್ಮಪಟ್ಟಿಕಾ □ ಚಮ್ಮಟ್ಟಿಗೆಯುಂ ಸಮಟಿಗೆಯೆನಲುಮಕ್ಕುಂ" ಎಂದು ಹೇಳಲಾಗಿದೆ. 'ಪಂಪಭಾರತ'ದಲ್ಲಿ ಈ ಅರ್ಥದಲ್ಲಿಯೇ ಈ ಪದ ಬಳಕೆಯಾಗಿದೆ (ಅನ್ನೆಗಂ ನಕುಳನುಂ ಅಂಕವಣೆಯುಂ ಬಾಳುಂ ಬಾರುಂ ಚಮ್ಮಟಿಗೆಯುಮಂ ಒರ್ವ ಕೀಟಿಳಿಂ ಪಿಡಿಯಿಸಿಕೊಂಡು ಬಂದು). ರಾಘವಾಂಕನು ತನ್ನ 'ಹರಿಶ್ಚಂದ್ರ ಕಾವ್ಯ'ದಲ್ಲಿ ಹರಿಶ್ಚಂದ್ರನು "ತುಡುಕಿ ಚಮ್ಮಟಿಗೆಯಂ ಸೆಳೆದು" ಗಾನರಾಣಿಯರಿಗೆ ಹೊಡೆದ ಪ್ರಸಂಗವಿದೆ.

ರೈತರು ಎತ್ತುಗಳನ್ನು ಹೊಡೆಯಲು ಬಳಸುವ ಬಾರುಕೋಲು ದಪ್ಪ ಹುರಿಯಿಂದ ಮಾಡಿದುದಾದರೂ ತುದಿಗೆ ಚರ್ಮದ ಪಟ್ಟಿ ಕಟ್ಟಿರುತ್ತಾರೆ. ಬುಗುರಿಯನ್ನು ಆಡಿಸುವ ದಾರಕ್ಕೂ ಚಾವಟಿ ಅಥವಾ ಚಾಟಿ ಎನ್ನುವುದು ರೂಢಿಯಲ್ಲಿದೆ. 'ಚಾಟಿಯಿಲ್ಲದೆ ಬುಗುರಿ ಆಡಿಸು' ಎಂಬ ಗಾದೆಯು ಕಾರ್ಯವನ್ನು ಹೇಗೋ ಸಾಧಿಸುವ ಚಾಲಾಕಿತನವನ್ನು ಸೂಚಿಸುತ್ತದೆ. ಹೀಗೆ ಚಮ್ಮಟಿಗೆ ಎಂಬ ಶಬ್ದವು ಒಂದೆಡೆ ದ್ರಾವಿಡಪದವಾಗಿ ಮತ್ತೊಂದೆಡೆ ಸಂಸ್ಕೃತ ಶಬ್ದವೊಂದರ ತದ್ಭವವಾಗಿ ಬೇರೆ ಬೇರೆ ಅರ್ಥಗಳನ್ನು ಪಡೆಯುತ್ತದೆ. ●

# ಪ್ರೊ.ಜಿ. ಅಬ್ದುಲ್ ಬಷೀರ್ ಅವರ ಪುಸ್ತಕಗಳ ಬಿಡುಗಡೆ

ದಿನಾಂಕ 11ನೇ ಜೂನ್ 2017 ರಂದು ಬಿ.ಎಂ.ಶ್ರೀ ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ಪ್ರೊ.ಜಿ.ಅಬ್ದುಲ್ ಬಷೀರ್ ಅವರು ರಚಿಸಿರುವ ಐದು ಪುಸ್ತಕಗಳನ್ನು ಕನ್ನಡ ಸಾಹಿತ್ಯ ಪರಿಷತ್ತು ಸಭಾಂಗಣದಲ್ಲಿ ಬಿಡುಗಡೆ ಮಾಡಲಾಯಿತು. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕನ್ನಡಜನ ಶಕ್ತಿ ಕೇಂದ್ರ ಆಯೋಜಿಸಿದ್ದ ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಹಿರಿಯ ಸಾಹಿತಿ ಡಾ. ಬರಗೂರು ರಾಮಚಂದ್ರಪ್ಪ, ನಾಡೋಜ ಹಂಪ ನಾಗರಾಜಯ್ಯ ಬಿ.ಎಂ.ಶ್ರೀ. ಪ್ರತಿಷ್ಠಾನದ ಅಧ್ಯಕ್ಷರಾದ ಡಾ.ಪಿ.ವಿ. ನಾರಾಯಣ, ಎಪಿಎಸ್ ಶಿಕ್ಷಣ ಸಂಸ್ಥೆ ಮಾಜಿ ಕಾರ್ಯದರ್ಶಿ ಎ.ಆರ್. ಆಚಾರ್ಯ, ಕಸಾಪದ ಗೌರವ ಕೋಶಾಧ್ಯಕ್ಷ ಪಿ.ಮಲ್ಲಿಕಾರ್ಜುನಪ್ಪ, ಕನ್ನಡ ಜನಶಕ್ತಿ ಕೇಂದ್ರದ ಅಧ್ಯಕ್ಷ ಸಿ.ಕೆ.ರಾಮೇಗೌಡ, ಡಾ.ಶಾಂತರಾಜು ಹಾಗೂ ಪ್ರೊ.ನೈಷಧಂ ಅವರುಗಳು ಭಾಗವಹಿಸಿದ್ದರು.



## ಬಿ. ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಪ್ರಕಟಿಸಿರುವ ಪುಸ್ತಕಗಳ ಕಿರುಪರಿಚಯ

**ಶ್ರೀನಿವಾಸರಾವ್ (ಎಸ್.ವಿ)**
**ಬೆಟಗೇರಿ ಕೃಷ್ಣ ಶರ್ಮ :ಜೀವನ ಪರಿಚಯ**
(ಸಾಹಿತಿ ವಿದ್ವಾಂಸರ ಕಿರು ಪುಸ್ತಕ ಮಾಲೆ – 2)
ಪು.iv+44 ಬೆಲೆ ರೂ. 20/– 2012

ಕನ್ನಡ ನವೋದಯ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ವಿಪುಲವಾಗಿ ಕೃಷಿ ಮಾಡಿ ಕನ್ನಡ ಸಾರಸ್ವತ ಲೋಕವನ್ನು ಶ್ರೀಮಂತಗೊಳಿಸಿದ ಗಣ್ಯರಲ್ಲಿ ಬೆಟಗೇರಿ ಕೃಷ್ಣ ಶರ್ಮರುಅಗ್ರ ಪಂಕ್ತಿಗೆ ಸೇರುತ್ತಾರೆ. 'ಆನಂದಕಂದ' ಇವರ ಕಾವ್ಯನಾಮ, ಕೃಷ್ಣಶರ್ಮರ ಜೀವನ ವೃತ್ತಾಂತವನ್ನು ಸರಳ ಭಾಷೆಯಲ್ಲಿ ಸಂಕ್ಷಿಪ್ತವಾಗಿ ನಿರೂಪಿಸಲಾಗಿದೆ. ಅಂತ್ಯ ಭಾಗದಲ್ಲಿ ಡಾ.ಎಸ್. ಆರ್. ಗುಂಜಾಳ ಮತ್ತು ಡಾ.ಎಸ್. ಎಲ್. ಸಂಗಮ ಇವರು ಸಂಗ್ರಹಿಸಿ ನೀಡಿರುವ ಆನಂದಕಂದದ ಕೃತಿ ಸೂಚಿ, ಅವರನ್ನು ಕುರಿತು (ವ್ಯಕ್ತಿ ಮತ್ತು ಸಾಹಿತ್ಯ) ಗ್ರಂಥಗಳು ಆನಂದಕಂದದ ಸಮಗ್ರ ಸಾಹಿತ್ಯವನ್ನು ಅಧ್ಯಯನ ಮಾಡುವವರಿಗೆ ಬಹು ಉಪಯುಕ್ತ.

**ಮುಳಕುಂಟಿ ರಮೇಶ್, ಸಂ.**
**ಪ್ರಾಚೀನ ಕನ್ನಡ ಕಾವ್ಯ ಸಂಗ್ರಹ :ಕನ್ನಡ ನಾಡಿನ ಮಕ್ಕಳ ಕಂಠ ಪಾಠಕ್ಕಾಗಿ ಪದ್ಯಗಳು**
ಪು :vii+40 ಬೆಲೆ ರೂ. 20/– 2012

ಮಕ್ಕಳ ಕಂಠಪಾಠ ಸ್ಪರ್ಧೆಗಾಗಿ ಮತ್ತು ಓದಿಕೊಳ್ಳುವುದಕ್ಕಾಗಿ ಎಂದು ಪ್ರಾಚೀನ ಕನ್ನಡಕಾವ್ಯ ಭಾಗಗಳನ್ನು ಆಯ್ದು ಸಿದ್ಧ ಪಡಿಸಿರುವ ಕೃತಿ. ಪಂಪ, ರನ್ನ, ಜನ್ನ, ಶ್ರೀವಿಜಯ, ನಾಗವರ್ಮ, ಜೇಡರ ದಾಸಿಮಯ್ಯ, ಅಕ್ಕಮಹಾದೇವಿ, ಬಸವಣ್ಣ, ಅಲ್ಲಮ ಪ್ರಭು, ಹರಿಹರ, ರಾಘವಾಂಕ, ಪುರಂದರದಾಸ, ಕನಕದಾಸ, ಚಾಯರಸ, ಸಂಚಿಹೊನ್ನಮ್ಮ, ಲಕ್ಷ್ಮೀಶ, ಸರ್ವಜ್ಞ ಮುಂತಾದವರ ಕಾವ್ಯಗಳ ಆಯ್ದ ಭಾಗಗಳನ್ನು ಪ್ರಸ್ತುತ ಪಡಿಸಲಾಗಿದೆ. ಈ ಮೂಲಕ ಮೂಲ ಕಾವ್ಯಗಳನ್ನು ಸಂಪೂರ್ಣವಾಗಿ ಅಧ್ಯಯನ ಮಾಡಲು ಆಸಕ್ತಿ ಬೆಳಸಿಕೊಳ್ಳಬೇಕೆಂಬ ಆಶಯವಿದೆ.

**ಶ್ರೀಧರ ಮೂರ್ತಿ (ಎನ್. ಎಸ್) ಸಂ.**
**ಸೃಜನ ಸಾಹಿತ್ಯ**
(ಎಂ. ವಿ. ಸೀ ವಾಚಿಕೆ – 1)
ಪು.xiv+292 ಬೆಲೆ ರೂ 150/– 2012

ಎಂ. ವಿ. ಸೀ ಯವರದು ಬಹುಮುಖೀ ಆಸಕ್ತಿಗಳುಳ್ಳ ವ್ಯಕ್ತಿತ್ವ ಅವರ ಸಾಹಿತ್ಯದ ಬಹಳ ಮುಖ್ಯವಾದ ಧೋರಣೆ ಸಾಮಾಜಿಕ ಸಮನ್ವಯ ಕುರಿತಾದದ್ದು ಶ್ರೀಯುತರು ಬರವಣಿಗೆಯನ್ನು ಮಾಡಿದ ಅವಧಿ ಹೊಸಗನ್ನಡ ಸಾಹಿತ್ಯದ ಮೊದಲ ಹಂತ. ಪ್ರಾಚೀನ ಸಾಹಿತ್ಯದ ಅಧ್ಯಯನ, ಆಯ್ದಕೆ ವ್ಯಾಖ್ಯಾನ ಮತ್ತು ಮರುಮೌಲ್ಯ ಮಾಪನವನ್ನು, ಹೊಸ ಮಾರ್ಗದ ಸಾಧ್ಯತೆಗಳನ್ನು ಎಂ. ವಿ. ಸೀ ಯವರು ತಮ್ಮ ಕೃತಿಗಳಲ್ಲಿ ರೂಪಿಸಿದರು.

ಪ್ರಸ್ತುತ ಗ್ರಂಥದಲ್ಲಿ ಎಂ. ವಿ. ಸೀ ಯವರ ಸಾಹಿತ್ಯವನ್ನು ಕಥೆಗಳು, ಕಾವ್ಯ, ಕಾದಂಬರಿಗಳೂ, ನಾಟಕ, ಮಕ್ಕಳ ಸಾಹಿತ್ಯ, ಪ್ರಬಂಧಗಳು ಎಂದು ಆರು ಶೀರ್ಷಿಕೆಗಳಡಿಯಲ್ಲಿ ವಿಮರ್ಶಿಸಲಾಗಿದೆ. ಈ ಕೃತಿ ಎಂ. ವಿ. ಸೀ ಅವರ ಸಾಹಿತ್ಯ ಶೈಲಿಯನ್ನು, ತೌಲನಿಕ ಅಧ್ಯಯನದ ಹೊಳಹನ್ನು ಅರಿಯಲು ಅನುಕೂಲವಾಗುತ್ತದೆ.

## ತಪ್ಪು–ಒಪ್ಪು

ಮೇ ತಿಂಗಳಿನ ಹೊಂಗನಸು ಪತ್ರಿಕೆಯಲ್ಲಿ ಪ್ರಕಟವಾದ ದತ್ತಿ ವಿವರಗಳ ಪಟ್ಟಿಯಲ್ಲಿ ಪ್ರಮಾದವಶಾತ್ ಹಲವಾರು ತಪ್ಪುಗಳು ನುಸುಳಿಬಿಟ್ಟಿರುತ್ತವೆ. ಓದುಗರ ಅನುಕೂಲಕ್ಕಾಗಿ ತಪ್ಪು ಮತ್ತು ಒಪ್ಪು ವಿವರಗಳನ್ನು ನೀಡಲಾಗಿದೆ. ಈ ತಪ್ಪುಗಳು ಪ್ರಕಟಕೊಂಡಿದ್ದಕ್ಕೆ ತಮ್ಮ ಕ್ಷಮೆ ಯಾಚಿಸುತ್ತೇವೆ.

| ಕ್ರ.ಸಂ. | ತಪ್ಪು | ಒಪ್ಪು |
|---|---|---|
| 1 | ಪ್ರೊ॥ ಡಿ.ಎಲ್.ಎನ್. ದತ್ತಿ | ಪ್ರೊ॥ ಡಿ.ಎಲ್.ನರಸಿಂಹಾಚಾರ್ |
| 2 | ಶ್ರೀಮತಿ ಕಮಲಿನಿ ಶಾ. ಬಾಲೂರಾವ್ ದತ್ತಿ | ಶ್ರೀ ಸಾಹಿತ್ಯ ಪ್ರಶಸ್ತಿ ದತ್ತಿ |
| 8 | ಅನಂತರಂಗ ಸಂಶೋಧನ ಗ್ರಂಥ ದತ್ತಿ | ಅನಂತರಂಗ ಪ್ರತಿಷ್ಠಾನ ದತ್ತಿ |
| 9 | ಪ್ರೊ॥ ಅನಂತರಂಗಾಚಾರ್ ಶತಮಾನೋತ್ಸವ ಸಮಿತಿ ದತ್ತಿ | ಪ್ರೊ॥ ಎನ್. ಅನಂತರಂಗಾಚಾರ್ ಪ್ರತಿಷ್ಠಾನ ದತ್ತಿ |
| 19 | ಶ್ರೀ ರಾಮಚಂದ್ರರಾವ್ ಗಿರಿರಾವ್ ಪಟವಾರಿ ದತ್ತಿ | ಶ್ರೀರಾಮಚಂದ್ರರಾವ್ ಪಟವಾರಿ ದತ್ತಿ |
| 34 | ಶ್ರೀ ಸಾರಂಗಿ ವೆಂಕಟರಾಮಯ್ಯ ಶ್ರೀಮತಿ ಪುಟ್ಟಚ್ಚಮ್ಮ ದತ್ತಿ | ಶ್ರೀ ಸಾರಂಗಿ ವೆಂಕಟರಾಮಯ್ಯ– ಪುಟ್ಟಚ್ಚಮ್ಮ ದತ್ತಿ – ಪುಸ್ತಕ ಬಹುಮಾನ |
| 35 | ಶ್ರೀಮತಿ ಶಾರದಮ್ಮ ಶ್ರೀ ಹನುಮಯ್ಯ ದತ್ತಿ | ಶ್ರೀಮತಿ ಶಾರದಮ್ಮ ಜಿ. ಹನುಮಯ್ಯ ದತ್ತಿ |
| 39 | ಪ್ರೊ॥ ಎಂ.ವೀ.ಸೀ. ದತ್ತಿ | ಪ್ರೊ॥ ವಿ.ಸೀತಾರಾಮಯ್ಯ ದತ್ತಿ |

ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ಸ್ಥಾಪಿಸಿರುವ ದತ್ತಿಗಳು ಮುಂದುವರೆದ ಭಾಗ

46 ಡಾ॥ ಆ.ನೇ ಉಪಾಧ್ಯೆ ದತ್ತಿ
47 ಬಿ.ಎಂ. ಶ್ರೀಕಂಠಯ್ಯ ದತ್ತಿ
48 ಬೇಟೆರಾಯ ದೀಕ್ಷಿತ್ ದತ್ತಿ
49 ಚಂದ್ರಶೇಖರ ಶರ್ಮ ದತ್ತಿ
50 ಡಾ॥ ಶಾಂತಾ ಪ್ರಭುಶಂಕರ ದತ್ತಿ

### ಕೋರಿಕೆ :

ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. 20/ – ಆಗಿದ್ದು ಐದು ವರ್ಷಗಳ ಚಂದಾಹಣ ರೂ. 100/– ಮಾತ್ರ. ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.

## ಎಂ. ಕೆ. ಇಂದಿರ

ಜನನ 5 ಜನವರಿ 1917 – ಮರಣ 15 ಮಾರ್ಚ್ 1994



ಎಂ ಕೆ ಇಂದಿರ ಅವರು ಕನ್ನಡದ ಹೆಸರಾಂತ ಲೇಖಕಿ, ಕಾದಂಬರಿಗಾರ್ತಿ ಇವರ ಕಾದಂಬರಿಗಳಲ್ಲಿ ಮಲೆನಾಡಿನ ವರ್ಣನೆ ಸುಂದರವಾಗಿ ಮೂಡಿ ಬಂದಿದೆ. ಎಂ.ಕೆ. ಇಂದಿರಾ ಅವರ 'ಗೆಜ್ಜೆಪೂಜೆ' 'ಫಣಿಯಮ್ಮ' ಮತ್ತು 'ಪೂರ್ವಾಪರ' ಎಂಬ ಕಾದಂಬರಿಗಳು ಚಲನಚಿತ್ರವಾಗಿವೆ. 'ಫಣಿಯಮ್ಮ' ಚಿತ್ರವನ್ನು ನಿರ್ದೇಶಿಸಿದವರು ಶ್ರೀಮತಿ ಪ್ರೇಮಾಕಾರಂತ್. ಈ ಚಿತ್ರ ಅನೇಕ ಪ್ರಶಸ್ತಿಗಳನ್ನು ಗಳಿಸಿಕೊಂಡಿತು. ನಟಿ ಎಲ್. ವಿ.ಶಾರದಾ ಈ ಚಿತ್ರದಲ್ಲಿ ಮುಖ್ಯ ಪಾತ್ರವನ್ನು ನಿರ್ವಹಿಸಿದ್ದರು. 'ಗೆಜ್ಜೆಪೂಜೆ' ಕಾದಂಬರಿಯನ್ನು ದಿವಂಗತ ಪುಟ್ಟಣ್ಣ ಕಣಗಾಲ್ ನಿರ್ದೇಶಿಸಿದ್ದರು.

ಎಂ ಕೆ ಇಂದಿರ ಅವರು ತೀರ್ಥಹಳ್ಳಿಯಲ್ಲಿ ಜನಿಸಿದರು. ಇವರ ತಂದೆ 'ತರೀಕೆರೆ ಸೂರ್ಯನಾರಾಯಣರಾವ್'; ತಾಯಿ 'ಬನಶಂಕರಮ್ಮ. ಅನೇಕ ಸುಪ್ರಸಿದ್ಧ ಕನ್ನಡಿಗರು, ಎಂ. ಕೆ. ಇಂದಿರ ಅವರ ಸಂಬಂಧಿಗಳು. ಸುಪ್ರಸಿದ್ಧ ಶಿಶುಸಾಹಿತಿ ಹೊಯಿಸಳ, ಇಂದಿರಾರವರ ಸೋದರಮಾವ. ಪ್ರಜಾವಾಣಿಯ ಖ್ಯಾತ ಸಂಪಾದಕರಾಗಿದ್ದ ಟಿ.ಎಸ್.ರಾಮಚಂದ್ರರಾವ್ (ಟಿಎಸ್ಸಾರ್) ಇವರ ತಮ್ಮ. ಜನಪ್ರಿಯ ಸಾಹಿತಿ, ಹಾಗೂ ಆಕಾಶವಾಣಿ ನಿರ್ದೇಶಕ, ಡಾ. ಎಚ್.ಕೆ.ರಂಗನಾಥ್, ಇವರ ಚಿಕ್ಕಮ್ಮನ ಮಗ.

ಕನ್ನಡ ಮಾಧ್ಯಮಿಕ ಶಾಲೆಯ 2 ನೆಯ ತರಗತಿಯವರೆಗೆ ಮಾತ್ರ ಇವರ ಶಿಕ್ಷಣ. 12ನೆಯ ವರ್ಷಕ್ಕೆ ಇವರ ಮದುವೆಯಾಯಿತು. ಇಂದಿರಾರವರು ಬರೆಯಲು ಪ್ರಾರಂಭಿಸಿದ್ದು 1963ರಲ್ಲಿ. ತುಂಗಭದ್ರ ಇವರ ಮೊದಲ ಕೃತಿ. ಕಥೆ, ಕಾದಂಬರಿ, ಪ್ರಹಸನ, ಹರಟೆ, ವ್ಯಕ್ತಿಚಿತ್ರ ಇತ್ಯಾದಿಯಾಗಿ 60ಕ್ಕೂ ಹೆಚ್ಚು ಕೃತಿಗಳನ್ನು ಬರೆದಿದ್ದಾರೆ. 'ಸದಾನಂದ', 'ಫಣಿಯಮ್ಮ' ಈ ಕಾದಂಬರಿಗಳಿಗೆ ಹಾಗು 'ನವರತ್ನ' ಕಥಾಸಂಕಲನಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿದೆ. 1975ರಲ್ಲಿ 'ಶ್ರೇಷ್ಠ ಲೇಖಕಿ' ಹಾಗು 'ಶ್ರೇಷ್ಠ ಚಿತ್ರಕತೆ' ಪ್ರಶಸ್ತಿ ಇವರಿಗೆ ಲಭಿಸಿವೆ. ಇವರ ಅನೇಕ ಕಾದಂಬರಿಗಳು ತೆಲುಗು , ಮಲೆಯಾಳಂ ಹಾಗೂ ಇಂಗ್ಲಿಷ್ ಭಾಷೆಗಳಿಗೆ ಅನುವಾದಗೊಂಡಿವೆ. 'ಗೆಜ್ಜೆ ಪೂಜೆ' ಚಿತ್ರದ ಚಿತ್ರಕಥೆಗಾಗಿ ನಿರ್ದೇಶಕ ಎಸ್.ಆರ್.ಪುಟ್ಟಣ್ಣ ಕಣಗಾಲ್ ಅವರಿಗೆ ಅತ್ಯುತ್ತಮ ಚಿತ್ರಕಥೆ ಪ್ರಶಸ್ತಿ ಪ್ರಕಟವಾದಾಗ ಮೂಲ ಕಾದಂಬರಿಕಾರ್ತಿ ಎಂ.ಕೆ.ಇಂದಿರಾ, ಈ ಪ್ರಶಸ್ತಿ ಸಲ್ಲಬೇಕಾಗಿರುವುದು ಮೂಲ ಲೇಖಕಿಗೆ ಎನ್ನುವ ವಾದ ಮಂಡಿಸಿದ್ದರು. (ಮೂಲ: ವಿಕೀಪೀಡಿಯಾ)


**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2015-2017**
**Office of Posting: Bangalore PSO, Bangalore 560026**
**Price :Annual Subscription Rs. 20/-**
**Date of publishing and Posting : 30-06-2017**


## ೨೦೧೭ ಜೂನ್ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ವಿವಿಧ ಹಂತದ ಸಂರಕ್ಷರಣಾ ಕಾರ್ಯವು ನಡೆಯುತ್ತಿದೆ. ೨೦೧೭ರ ಜೂನ್ ತಿಂಗಳಿನಲ್ಲಿ ೩ ಗ್ರಂಥಗಳ ಶುಷ್ಕ ಶುದ್ಧೀಕರಣ, ೩ ಮಸಿ+ತೈಲ, ೩ ಗ್ರಂಥ ಪತ್ರಗಳ ಮರುಜೋಡಣೆ ಕಾರ್ಯ, ೪ ಗ್ರಂಥಗಳಿಗೆ ಅಟ್ಟೆಕಟ್ಟಿದ ಕಾರ್ಯ, ೫ ಗ್ರಂಥಗಳಿಗೆ ಬಟ್ಟೆ ಕಟ್ಟುವಿಕೆ ಕಾರ್ಯ, ಮತ್ತು ೩ ಗ್ರಂಥಗಳಿಗೆ ಸೂಚಿಯನ್ನು ತಯಾರಿಸಿದೆ.

ಹೊರಗಿನಿಂದ ಬಂದ ಎರಡು ಗ್ರಂಥಗಳನ್ನು ಸಂರಕ್ಷಿಸಿ, ಸೂಚಿ ಮಾಡಲಾಗಿದೆ

## ಕರ್ನಾಟಕ ಲೋಚನ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಪ್ರಕಟಿಸುವ ಷಾಣ್ಮಾಸಿಕ ವಿದ್ವತ್ ಪತ್ರಿಕೆ ಕರ್ನಾಟಕ ಲೋಚನ ಪತ್ರಿಕೆಗೆ ಸಾಹಿತ್ಯ-ಸಂಸ್ಕೃತಿಗೆ ಸಂಬಂಧಿಸಿದ ವಿಮರ್ಶಾತ್ಮಕ/ಸಂಶೋಧನಾತ್ಮಕ ಲೇಖನಗಳನ್ನು ವಿದ್ವಾಂಸರಿಂದ ಆಹ್ವಾನಿಸಿದೆ. ಲೇಖಕರು ತಮ್ಮ ಲೇಖನಗಳನ್ನು ಹಸ್ತಪ್ರತಿ ಅಥವಾ ಬೆರಳಚ್ಚು ರೂಪದಲ್ಲಿ ಪ್ರತಿಷ್ಠಾನದ ವಿಳಾಸಕ್ಕೆ ರವಾನಿಸಬಹುದು ಅಥವಾ bmsrilochana@gmail.comಗೆ ಈ ಮೈಲ್ ಮೂಲಕ ರವಾನಿಸಬಹುದು.

## ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ

ಪ್ರತಿಷ್ಠಾನವು ಪ್ರಕಟಿಸುತ್ತಿರುವ ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ ವಿವರ: ವಾರ್ಷಿಕ ರೂ. 100/- (ವರ್ಷದಲ್ಲಿ ಎರಡು ಸಂಚಿಕೆಗಳನ್ನು ಪ್ರಕಟಿಸಲಾಗುತ್ತಿದೆ) ಆಜೀವ ಚಂದಾ ರೂ. 1500/- ಆಗಿರುತ್ತದೆ. ಎಲ್ಲಾ ಸಾಹಿತ್ಯಾಸಕ್ತರೂ ಈ ವಿದ್ವತ್ ಪತ್ರಿಕೆಗೆ ಚಂದಾದಾರಾಗಬೇಕೆಂದು ಕೋರುತ್ತೇವೆ.


**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath


**ಅಚ್ಚಾದ ಪುಸ್ತಕ** ತೆರೆದ-ಅಂಚೆ

ಶ್ರೀಮತಿ/ಶ್ರೀ.......................................................................................

.......................................................................................

.......................................................................................


ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೪೭೭